# ಸಂಭಾಷಣೆಯ ಸುತ್ತ ಒಂದು ತರಗತಿ

ಅಮ್ರಿತಾ ಮಶಿಹ್

6 ನೇ ತರಗತಿಯ ಮಕ್ಕಳಿಗೆ ಇಂಗ್ಲಿಷ್ ಪಾಠವೊಂದನ್ನು ಮಕ್ಕಳ ದೈನಂದಿನ ಅನುಭವಕ್ಕೆ ಸಂಬಂಧ ಕಲ್ಪಿಸಲು ಪ್ರಯತ್ನಿಸಿದ ನನ್ನ ಅನುಭವವನ್ನು ಇಲ್ಲಿ ಹಂಚಿಕೊಂಡಿದ್ದೇನೆ. ಈ ಪಾಠದಿಂದಾಗಿ ಮಕ್ಕಳು ತಮ್ಮ ಚಿಂತನೆಗಳನ್ನು ಎಲ್ಲರ ಬಳಿ ಮುಕ್ತವಾಗಿ ಹಂಚಿಕೊಳ್ಳಲು ಮತ್ತು ಹಲವು ವಿಭಿನ್ನ ಸನ್ನಿವೇಶಗಳನ್ನು ಎದುರಿಸುವಾಗ ಅಗತ್ಯವಿರುವ ಸಂವಹನಕ್ಕಾಗಿ ಸಂಭಾಷಣೆಗಳನ್ನು ಹೆಣೆಯಲು ಕಲಿತರು. ಇದರಲ್ಲಿ ತರಗತಿಯ ಎಲ್ಲ ಮಕ್ಕಳು ಭಾಗವಹಿಸಿದ್ದರು ಮತ್ತು ಪ್ರತಿಯೊಬ್ಬರೂ ತಮ್ಮ ತಮ್ಮ ಚಿಂತನೆಗಳನ್ನು ಪ್ರಸ್ತುತಪಡಿಸುವಾಗ ಇತರರು ಗಮನವಿಟ್ಟು ಆಲಿಸುತ್ತಿದ್ದುದರಿಂದ ಸಹಪಾಠಿಗಳಿಂದ, ಪರಸ್ಪರರಿಂದ ಕಲಿಯಲು ಸಹಾಯಕವಾಯಿತು. ಇದು ಶಾಲಾ ಅಸೆಂಬ್ಲಿಯಲ್ಲಿಯೂ ಕೂಡ ತಮ್ಮ ಚಟುವಟಿಕೆಗಳನ್ನು ಪ್ರಸ್ತುತಪಡಿಸಲು ಮಕ್ಕಳಿಗೆ ಮತ್ತಷ್ಟು ಆತ್ಮವಿಶ್ವಾಸ ನೀಡಿತು.

ನಾನು ಕಪ್ಪು ಹಲಗೆಯ ಮೇಲೆ ವಿಷಯ-'ಸಂಭಾಷಣೆ' ಎಂದು ಬರೆಯುವ ಮೂಲಕ ನನ್ನ ಮೊದಲ ತರಗತಿಯನ್ನು ಪ್ರಾರಂಭಿಸಿದೆ. ಅನಂತರ ಬರೆದಿರುವ ಪದವನ್ನು ಓದುವಂತೆ ನಾನು ವಿದ್ಯಾರ್ಥಿಗಳನ್ನು ಕೇಳಿದೆ. 5 ನೇ ತರಗತಿಯಲ್ಲಿ ನಾವು ಕೆಲವು ಮಾತುಕತೆ ನಡೆಸಿದ್ದರ ಪರಿಣಾಮವಾಗಿ ಹೆಚ್ಚಿನ ಮಕ್ಕಳು ಅದನ್ನು ಓದಲು ಸಮರ್ಥರಾಗಿದ್ದರು. ಈ ಪದದ ಅರ್ಥವೇನು ಎಂದು ನಾನು ಅವರನ್ನು ಕೇಳಿದೆ.

ಅದಕ್ಕೆ ಮಕ್ಕಳು ಮಾತನಾಡುವುದು, ಚರ್ಚಿಸುವುದು, ಅಭಿವ್ಯಕ್ತಿಸುವುದು, ಸಭೆ ನಡೆಸುವುದು, ಸಂದೇಶವನ್ನು ತಿಳಿಸುವುದು ಇತ್ಯಾದಿ ಎಂದು ಉತ್ತರಿಸಿದರು. ನಿಮ್ಮ ದೈನಂದಿನ ಜೀವನದಲ್ಲಿ ನೀವು ಯಾವ ರೀತಿಯ ಸಂಭಾಷಣೆಗಳನ್ನು ಕೇಳಿದ್ದೀರಿ? ಎಂಬುದು ನನ್ನ ಮುಂದಿನ ಪ್ರಶ್ನೆಯಾಗಿತ್ತು.

ಅನಂತರ ಮಕ್ಕಳು ತಮ್ಮ ಸಂಭಾಷಣೆಯ ಅನುಭವಗಳನ್ನು ನನ್ನೊಂದಿಗೆ ಹಂಚಿಕೊಳ್ಳಲು ಪ್ರಾರಂಭಿಸಿದರು ಮತ್ತು ನಾನು ಅವುಗಳನ್ನು ಪಟ್ಟಿ ಮಾಡಿದೆನು:

ತಾಯಿ ಮತ್ತು ಮಗು
ಡಾಕ್ಟರ್ ಮತ್ತು ನರ್ಸ್
ಪ್ರಾಂಶುಪಾಲರು ಮತ್ತು ಶಿಕ್ಷಕರು
ವಿದ್ಯಾರ್ಥಿ ಮತ್ತು ವಿದ್ಯಾರ್ಥಿ
ಇವು ಮತ್ತು ಇದೇ ರೀತಿಯ ಇತರೆ ಹಲವು ಉದಾಹರಣೆಗಳು ವಿದ್ಯಾರ್ಥಿಗಳಿಂದ ಕೇಳಿಬಂದವು.

ಇದರಿಂದಾಗಿ ನನಗೆ ನನ್ನ ನಿಜವಾದ ಬೋಧನೆಯನ್ನು ಮಕ್ಕಳಿಗೆ ಪರಿಚಯಿಸಲು ಸಾಧ್ಯವಾಯಿತು ಮತ್ತು ನಾನು ಅವರಿಗೆ ಕೆಲವು ವಿಷಯಗಳನ್ನು ನೀಡುವುದಾಗಿಯು ಮತ್ತು ಅದಕ್ಕೆ ಅವರು ಸಂಭಾಷಣೆಗಳನ್ನು ರಚಿಸಬೇಕೆಂದು

ಹೇಳಿದೆ. ಅವರು ಸಂಭಾಷಣೆಗಳನ್ನು ಇಂಗ್ಲಿಷ್ ಹಿಂದಿ ಅಥವಾ ಎರಡೂ ಭಾಷೆಗಳಲ್ಲಿಯೂ ಸಹ ಪ್ರಸ್ತುತಪಡಿಸಬಹುದು ಎಂದು ಹೇಳಿದೆ.

ಅವರು ಸಂಭಾಷಣೆ ಬರೆಯಬೇಕಾಗಿದ್ದ ವಿಷಯಗಳು ಈ ಕೆಳಕಂಡಂತಿದ್ದವು:

ವೈದ್ಯ/ಡಾಕ್ಟರ್- ಶುಶ್ರೂಷಕ/ನರ್ಸ್

ಶಿಕ್ಷಕ - ವಿದ್ಯಾರ್ಥಿ

ಇಬ್ಬರು ಕ್ರಿಕೆಟಿಗರು

ತಂದೆ/ತಾಯಿ- ಮಗು

ಬಸ್ ಚಾಲಕ/ಡ್ರೈವರ್ - ನಿರ್ವಾಹಕ/ಕಂಡಕ್ಟರ್

ಪುಸ್ತಕ ಮಾರಾಟಗಾರ - ವಿದ್ಯಾರ್ಥಿ

ಇಬ್ಬರು ಸ್ನೇಹಿತರು

ಪೋಸ್ಟ್ ಮ್ಯಾನ್ ಮತ್ತು ಒಬ್ಬ ಸಾರ್ವಜನಿಕರು

ಇಬ್ಬರು ಗ್ರಾಮಸ್ಥರು

ಸ್ವಚ್ಛಗೊಳಿಸುವವರು ಮತ್ತು ವಿದ್ಯಾರ್ಥಿ

ತರಗತಿಯನ್ನು ನಾನು ಇಬ್ಬಿಬ್ಬರ ಗುಂಪುಗಳಾಗಿ ವಿಂಗಡಿಸಿ, ಅವರು ಪರಸ್ಪರ ಚರ್ಚಿಸಿ 'ಸಂಭಾಷಣೆ' ಬರೆಯಲು ಹತ್ತು ನಿಮಿಷಗಳ ಕಾಲಾವಕಾಶವನ್ನು ನೀಡಿದೆ ಮತ್ತು ಅದನ್ನು ಪ್ರಸ್ತುತಪಡಿಸಲು ತಿಳಿಸಿದೆ. ಮೊದಲು ಓದಿದ ಸಂಭಾಷಣೆಯೊಂದು ಹೀಗಿತ್ತು:

ವಿದ್ಯಾರ್ಥಿ - ನನಗೆ ಒಂದು ಪುಸ್ತಕ ಬೇಕಾಗಿತ್ತು.

ಪುಸ್ತಕ ಮಾರಾಟಗಾರ - ಯಾವ ಪುಸ್ತಕ?

ವಿದ್ಯಾರ್ಥಿ - ಇಂಗ್ಲಿಷ್ ಪುಸ್ತಕ.

ಪುಸ್ತಕ ಮಾರಾಟಗಾರ - ಹಾ, ಇಲ್ಲಿದೆ.

ವಿದ್ಯಾರ್ಥಿ - ಅದರ ಬೆಲೆ ಎಷ್ಟು?

ಪುಸ್ತಕ ಮಾರಾಟಗಾರ - ನೂರೈವತ್ತು ರೂಪಾಯಿಗಳು.

ವಿದ್ಯಾರ್ಥಿ - ಬೆಲೆ ಸ್ವಲ್ಪ ಕಡಮೆ ಮಾಡಿ ಕೊಡಿ.

ಪುಸ್ತಕ ಮಾರಾಟಗಾರ - ಸರಿ, ನೂರ ಮೂವತ್ತು ರೂಪಾಯಿಗಳನ್ನು ಕೊಡಿ.

ವಿದ್ಯಾರ್ಥಿ - ಧನ್ಯವಾದಗಳು.

ಹಾಗೆಯೇ ವಿದ್ಯಾರ್ಥಿ-3 ಮತ್ತು ವಿದ್ಯಾರ್ಥಿ-4 ಸಹ ಬಂದು ತಮ್ಮ ಸಂಭಾಷಣೆಗಳನ್ನು ಪ್ರಸ್ತುತಪಡಿಸಿದರು. ಹಾಗೆಯೇ ಇತರ ವಿದ್ಯಾರ್ಥಿಗಳು ಕೂಡ ತಮ್ಮ ತಮ್ಮ ಸರದಿಯಲ್ಲಿ ಬಂದು ಪ್ರಸ್ತುತಪಡಿಸಿದರು. ಶಿಕ್ಷಕರು ಮತ್ತು ವಿದ್ಯಾರ್ಥಿಗಳ ವಿಷಯದ ಸಂಭಾಷಣೆಯನ್ನು ಪ್ರಸ್ತುತಪಡಿಸಿದ ವಿದ್ಯಾರ್ಥಿಗಳು ತಮ್ಮ ಆಕರ್ಷಕ ಹಾವಭಾವಗಳಿಂದ ಇತರರನ್ನು ನಕ್ಕು-ನಲಿಸಿದರು.

ಸಮಯ ಮುಗಿದಿದ್ದರಿಂದ ಕೆಲವು ವಿದ್ಯಾರ್ಥಿಗಳು ಪ್ರಸ್ತುತಪಡಿಸಲಾಗಲಿಲ್ಲ, ಅವರಿಗೆ ನಾಳೆ ಪ್ರಸ್ತುತಪಡಿಸಲು ತಿಳಿಸಿದೆ

ಮರುದಿನ ನಾನು, ನಿನ್ನೆ ಪ್ರಸ್ತುತಪಡಿಸದೆ ಹೋದ ವಿದ್ಯಾರ್ಥಿಗಳ ಸಂಭಾಷಣೆಯೊಂದಿಗೆ ಅಂದಿನ ತರಗತಿಯನ್ನು ಪ್ರಾರಂಭಿಸಿದೆ. ಇಂದು ಅವರಲ್ಲಿ ಕೆಲವರು ಹಿಂದಿಯಲ್ಲಿ, ಇನ್ನೂ ಕೆಲವರು ಎರಡೂ ಭಾಷೆಗಳಲ್ಲಿಯೂ ತಮ್ಮ ಸಂಭಾಷಣೆಗಳನ್ನು ಪ್ರಸ್ತುತಪಡಿಸಿದರು. ಪ್ರತಿಯೊಬ್ಬರಿಗೂ ಅವರವರ ಸಂಭಾಷಣೆಗಳನ್ನು ಮಂಡಿಸುವ ಅವಕಾಶ ಸಿಕ್ಕಿತು.

ಒಂದು ನಿರ್ದಿಷ್ಟ ಭಾಷೆಯನ್ನು ಸರಿಯಾಗಿ ತಿಳಿದಿದ್ದರೆ ವಿವಿಧ ರೀತಿಯ ಜನರೊಂದಿಗೆ ಸಂಭಾಷಣೆ ನಡೆಸಲು ನಮಗೆ ಹೇಗೆ ಸಹಾಯಕವಾಗುತ್ತದೆ ಎಂಬುದನ್ನು ನಾವು ಚರ್ಚಿಸಿದೆವು. ಆಗ ನಾವು ನಮ್ಮ ಸಂದೇಶಗಳನ್ನು ಇತರರಿಗೆ ಸಹಜವಾಗಿ ತಿಳಿಸಲು ಸಾಧ್ಯವಾಗುತ್ತದೆ. ವಿದ್ಯಾರ್ಥಿಗಳು ಸಹ ತಮ್ಮ ತಮ್ಮ ದೈನಂದಿನ ಜೀವನದ ಅನುಭವಗಳನ್ನು ಹಂಚಿಕೊಂಡರು.

ಹೀಗೆ ಅಂದಿನ ತರಗತಿಯು ಮುಕ್ತಾಯವಾಯಿತು. ವಿಷಯದ ಬಗ್ಗೆ ವಿದ್ಯಾರ್ಥಿಗಳಿಗಿದ್ದ ಉತ್ಸಾಹ ಮತ್ತು ಆಸಕ್ತಿಯನ್ನು ನೋಡಿದ ಮೇಲೆ ನನಗೆ, ನಾನು ಅದನ್ನು ಇನ್ನೂ ಹೆಚ್ಚು ಆಸಕ್ತಿಕರ ರೀತಿಯಲ್ಲಿ ಹೇಗೆ ಮುಂದಕ್ಕೆ ಕೊಂಡೊಯ್ಯಬಹುದು ಮತ್ತು ಇದರಿಂದ ನಾನು ವಿದ್ಯಾರ್ಥಿಗಳನ್ನು ಹೇಗೆ ಇನ್ನಷ್ಟು ತೊಡಗಿಸಿಕೊಳ್ಳಲು ಸಹಾಯವಾಗಬಹುದು ಎಂದು ಯೋಚಿಸುತ್ತಿದ್ದೆ. ಆದ್ದರಿಂದ ಮರುದಿನದ ಯೋಜನೆಯನ್ನು ಮತ್ತಷ್ಟು ವಿಭಿನ್ನವಾಗಿ ಮತ್ತು ಸಂವಾದಾತ್ಮಕವಾಗಿಸಲು ಯೋಚಿಸುವಂತೆ ಅವರ ಕಲಿಕೆಯು ನನ್ನನ್ನು ಪ್ರೇರೇಪಿಸಿತು. ಅವರು ತಮ್ಮ ದೈನಂದಿನ ಜೀವನದಲ್ಲಿ ಬಳಸಬಹುದಾದ ಕೆಲವು ಪ್ರಶ್ನೆಗಳನ್ನು ನಾನು ಯೋಜಿಸಿದೆ.

ಆ ಪ್ರಶ್ನೆಗಳೆಂದರೆ:

ನೀನು ಎಲ್ಲಿಗೆ ಹೋಗುತ್ತಿದ್ದೀಯಾ?

ನೀನು ಏನು ಮಾಡುತ್ತಿದ್ದೀಯಾ?

ನೀನು ಎಲ್ಲಿ ವಾಸಿಸುತ್ತಿದ್ದೀಯಾ?

ಬೆಳಗ್ಗೆ ನೀನು ಏನು ತಿಂಡಿ ತಿಂದಿದ್ದೀಯಾ?

ನಿನಗೆ ಹುಷಾರಿಲ್ಲವೇ?

ನೀನು ನಿನ್ನ ಕೈಗಳನ್ನು ತೊಳೆದಿದ್ದೀಯಾ?

ನೀನು ಮಧ್ಯಾಹ್ನ ಏನು ಊಟ ಮಾಡಿದೆ?

ನೀನು ನಿನ್ನ ಹೋಂ ವರ್ಕ್ ಅನ್ನು ಮಾಡಿದ್ದೀಯಾ?

ನಾನು ನಿನಗೆ ಸಹಾಯ ಮಾಡಬಹುದೇ?

ನೀನು ಯಾವ ಆಟವನ್ನು ಆಡಲು ಇಷ್ಟಪಡುತ್ತೀಯಾ?

ನೀನು ನನ್ನೊಂದಿಗೆ ಆಟ ಆಡುತ್ತೀಯಾ

ನೀನು ರಾತ್ರಿ ಏನು ಊಟ ಮಾಡಿದೆ?

ನಾನು 5 ವಿದ್ಯಾರ್ಥಿಗಳನ್ನು ಒಳಗೊಂಡಂತ  ಒಂದೊಂದು ಗುಂಪನ್ನು ರಚಿಸಿದೆ. ಈ ಪ್ರಶ್ನೆಗಳನ್ನು ಪ್ರತಿ ಗುಂಪಿಗೆ 2 ಪ್ರಶ್ನೆಗಳಂತೆ ನೀಡಲು ಯೋಜಿಸಿದೆ ಮತ್ತು ಪ್ರತಿ ಗುಂಪಿನ ವಿದ್ಯಾರ್ಥಿಗಳು ಆ ಪ್ರಶ್ನೆಗಳಿಗೆ ಇಂಗ್ಲಿಷ್ ಭಾಷೆಯಲ್ಲಿ ಸಂಭಾಷಣೆಯನ್ನು ರಚಿಸಲು ಹಾಗೂ ಅದನ್ನು ಒಂದು ಚಾರ್ಟ್ ಪೇಪರ್ ಮೇಲೆ ಬರೆದು ಇತರೆ ವಿದ್ಯಾರ್ಥಿಗಳ ಮುಂದೆ  ಪ್ರಸ್ತುತಪಡಿಸಬೇಕೆಂದು ಸೂಚಿಸುವುದು. ಎಲ್ಲ ಗುಂಪುಗಳಲ್ಲಿಯೂ ಮೂರು ಹಂತದ ಮಕ್ಕಳಿದ್ದದ್ದರಿಂದಾಗಿ ಪರಸ್ಪರರಿಂದ  ಮತ್ತು ಜೊತೆಯಾಗಿ ಕಲಿಯಲು ಸಾಧ್ಯವಾಗುತ್ತದೆ.

ನಾನು ಆ ದಿನ ತರಗತಿಗೆ ಹೋಗಿ ಈ ಚಟುವಟಿಕೆಯನ್ನು ಕುರಿತು ಮಕ್ಕಳಿಗೆ ವಿವರಿಸಿದೆ ಮತ್ತು ಅವರಿಗೆ ಅಗತ್ಯವಿರುವ ಸಾಮಗ್ರಿಗಳನ್ನು ನೀಡಿದೆ. ಅಂದರೆ: ಮಾರ್ಕರ್ ಪೆನ್, ಚಾರ್ಟ್ ಪೇಪರ್ ಮತ್ತು ಅವರು ಮಂಡಿಸಬೇಕಾದ ವಿಷಯ.

ಈ ಎರಡು ಪ್ರಶ್ನೆಗಳು ಪರಸ್ಪರ ಹೇಗೆ ಸಂಬಂಧ ಹೊಂದಿವೆ ಮತ್ತು ಸ್ನೇಹಿತರು ಅಥವಾ ಸಂಬಂಧಿಕರ ಹೆಸರುಗಳನ್ನು ಬಳಸಿಕೊಂಡು ಸಂಭಾಷಣೆಗಳನ್ನು ರಚಿಸಲು ಅವುಗಳನ್ನು ಹೇಗೆ ಬಳಸಬಹುದು ಎಂಬುದನ್ನು ನಾನು ಅವರಿಗೆ ವಿವರಿಸಿದೆ

ಉದಾಹರಣೆಗೆ:

ನೀನು ಯಾವ ಆಟವನ್ನು ಆಡಲು ಇಷ್ಟಪಡುತ್ತೀಯಾ?

ನೀನು ನನ್ನೊಂದಿಗೆ ಆಟ ಆಡುತ್ತೀಯಾ?

ವಿಷಯಗಳನ್ನು ಅವರವರ ಗುಂಪುಗಳಲ್ಲಿ ಚರ್ಚಿಸಲು ಮತ್ತು ಅನಂತರ ಅದನ್ನು ಚಾರ್ಟ್‌ಗಳಲ್ಲಿ ಬರೆದು ಮಂಡಿಸಲು ನಾನು ಅವರಿಗೆ ಸುಮಾರು 15 ನಿಮಿಷಗಳ ಕಾಲಾವಧಿಯನ್ನು ನೀಡಿದ್ದೆನು. ನನಗೆ ಆಶ್ಚರ್ಯವಾಗುವಂತೆ,  ಕೊಟ್ಟಿರುವ ಗಡುವು ಮುಗಿಯುವುದಕ್ಕೂ ಮುನ್ನವೇ 2 ಗುಂಪುಗಳು ಬರೆದರು ಮತ್ತು ಅವರ ಸಂಭಾಷಣೆಗಳು ಬಹಳ ಅದ್ಭುತವಾಗಿ ಮೂಡಿಬಂದಿದ್ದವು.  ನಾನು ಒಂದು ಗುಂಪಿನ ಸಂಭಾಷಣೆಯನ್ನು ಹಂಚಿಕೊಳ್ಳುತ್ತೇನೆ.

ನೀನು ಮಧ್ಯಾಹ್ನ ಏನು ಊಟ ಮಾಡಿದೆ?

ನಿನಗೆ ಹುಷಾರಿಲ್ಲವೇ?

ಇವು ಆ ಗುಂಪಿಗಿದ್ದ  ಪ್ರಶ್ನೆಗಳಾಗಿದ್ದವು.

ಇಬ್ಬರು ವಿದ್ಯಾರ್ಥಿಗಳು ತಮ್ಮದೇ ಆದ ಭಾಷೆಯಲ್ಲಿ ಸಂಭಾಷಣೆಗಳನ್ನು ರಚಿಸಿದ್ದರು.

ರಾಣಿ- ಹಲೋ ರಾಜು

ರಾಜು- ಹಲೋ ರಾಣಿ

ರಾಣಿ-ಹೇಗಿದ್ದೀಯ?

ರಾಜು- ಓ, ಇವತ್ತು ಮಧ್ಯಾಹ್ನ ಏನು ಊಟ ಮಾಡಿದೆ

ರಾಣಿ- ನಾನು ಆಲೂಗಡ್ಡೆ ಪಲ್ಯ ಮತ್ತು ಚಪಾತಿಯನ್ನು ತಿಂದೆ. ನಿನಗೆ ಹುಷಾರಿಲ್ಲವಾ? ನಿನಗೆ ಹೊಟ್ಟೆ ನೋವು ಇದೆಯಾ?

ರಾಜು-ಹೌದು ರಾಣಿ, ನಾನು ಡಾಕ್ಟರ್ ಹತ್ತಿರ ಹೋಗುತ್ತಿದ್ದೇನೆ

ರಾಣಿ- ಟೇಕ್ ಕೇರ್!ಹುಷಾರು ರಾಜು ಬೈ

ರಾಜು- ಬೈ, ರಾಣಿ

ಈ ರೀತಿಯಲ್ಲಿ ಮಕ್ಕಳು ತಮ್ಮದೇ ರೀತಿಯಲ್ಲಿ ಸಂಭಾಷಣೆಗಳನ್ನು ರಚಿಸಲು ಮತ್ತು ಮಾತನಾಡುವ ಅವಕಾಶಗಳನ್ನು ಪಡೆಯುವುದರೊಂದಿಗೆ ಬರವಣಿಗೆಯನ್ನು ಅಭ್ಯಾಸ ಮಾಡಲೂ ಸಾಧ್ಯವಾಯಿತು. ಇದೊಂದು ಗುಂಪು ಚಟುವಟಿಕೆಯಾಗಿದ್ದರಿಂದ ಸಂಭಾಷಣೆಗಳನ್ನು ಬರೆಯುವಾಗ ಕಾಗುಣಿತಗಳು ತಪ್ಪಾಗಿದ್ದಲ್ಲಿ, ಅವುಗಳನ್ನು ಸರಿಪಡಿಸಲು ಒಬ್ಬರಿಗೊಬ್ಬರು ಸಹಕರಿಸುತ್ತಿದ್ದರು.

ಆದ್ದರಿಂದ ಗುಂಪಿನಲ್ಲಿರುವ ಪ್ರತಿಯೊಬ್ಬ ವಿದ್ಯಾರ್ಥಿಯೂ ತಮ್ಮ ಆಲೋಚನೆಗಳನ್ನು ಬರವಣಿಗೆಯ ರೂಪದಲ್ಲಿ ಅಭಿವ್ಯಕ್ತಗೊಳಿಸುವುದನ್ನು ಕಲಿತರು. ಮಾತನಾಡಲು ಮತ್ತು ಬರೆಯಲು ಸಂಕೋಚಪಡುತ್ತಿದ್ದ ವಿದ್ಯಾರ್ಥಿಗಳಿಗೆ ಈ ಸಂಭಾಷಣೆಯ ತರಗತಿಯು ಅವರದೇ ಭಾಷೆಗಳಲ್ಲಿ ಮುಕ್ತವಾಗಿ ಸಂವಾದ ಮಾಡಲು ಸಹಾಯ ಮಾಡಿದಂತಾಯಿತು. ಇವೆಲ್ಲ ಚಟುವಟಿಕೆಗಳು ಗುಂಪಿನೊಳಗೆ ನಡೆಯುತ್ತಿದ್ದರಿಂದ ಅವರು ತಮ್ಮ ಭಿನ್ನಾಭಿಪ್ರಾಯಗಳನ್ನು ನೀಗಿಕೊಂಡು ಮಾತನಾಡಲು ಸಾಧ್ಯವಾಯಿತು. ಒಬ್ಬ ಶಿಕ್ಷಕಿಯಾಗಿ ಪಠ್ಯಪುಸ್ತಕದ ಪಾಠವನ್ನು ಸವಾಲಿನದಾಗಿ, ಲವಲವಿಕೆಯಿಂದ ಕೂಡಿರುವಂತೆ ಮಾಡಿದ್ದಲ್ಲದೆ ಮಕ್ಕಳಂತೆ ನಾನೂ ಕೂಡ ಇಡೀ ಪ್ರಕ್ರಿಯೆಯನ್ನು ಬಹುವಾಗಿ ಆನಂದಿಸಿದೆ.

***

**ಅಮ್ರಿತಾ ಮಶಿಹ್:** ಇವರು ಧಮ್ತರಿಯಲ್ಲಿರುವ ಅಜೀಂ ಪ್ರೇಮ್‌ಜಿ ಶಾಲೆಯಲ್ಲಿ ಫೆಬ್ರವರಿ 2012 ರಿಂದ ಕಾರ್ಯ ನಿರ್ವಹಿಸುತ್ತಿದ್ದಾರೆ. ಒಂದು ಖಾಸಗಿ ಶಾಲೆಯಲ್ಲಿ, ಇಂಗ್ಲಿಷ್ ಮತ್ತು ವಿಜ್ಞಾನವನ್ನು ಬೋಧಿಸುವ ಮೂಲಕ 2000 ರಲ್ಲಿ ಶಿಕ್ಷಕಿ ವೃತ್ತಿಯನ್ನು ಪ್ರಾರಂಭಿಸಿದರು. ಅನಂತರ ವಿಜ್ಞಾನ ಶಿಕ್ಷಕಿಯಾಗಿ ಕೆಲಸ ಮಾಡಿದ್ದಾರೆ. ಜೀವವಿಜ್ಞಾನ ಮತ್ತು ಶಿಕ್ಷಣದಲ್ಲಿ ಪದವಿಗಳನ್ನು (ಬಿಎ) ಪಡೆದಿದ್ದಾರೆ ಮತ್ತು ರಸಾಯನವಿಜ್ಞಾನ ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದಾರೆ. ಅವರನ್ನು amrita.masih@azimpremjifoundation.org ಮೂಲಕ ಸಂಪರ್ಕಿಸಬಹುದು

ಅನುವಾದ: ಲತಾ ಕೆ ಸಿ ಪರಿಶೀಲನೆ: ನಾಗಮಣಿ ಎಸ್ ಎನ್